ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 17 ನೇ ಮಾರ್ಚ್, 2020

ಅನ್ನಭಾಗ್ಯ ಯೋಜನೆ ಬಗ್ಗೆ

ಶ್ರೀ ಕಾಂತರಾಜ್ (ಬಿಎಂಎಲ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1052 (1161) ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯ ಸರ್ಕಾರ ಅನ್ನಭಾಗ್ಯ ಯೋಜನೆ ಜಾರಿಗೆಗೊಳಿಸಿದ ಬಳಿಕ ಆಹಾರ ಭದ್ರತಾ ಕಾಯ್ದೆ ಅನುಷ್ಠಾನವಾಗಿರುವುದರಿಂದ ಕಳೆದ 3 ವರ್ಷಗಳಿಂದ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಬಂದಿರುವ ಅನುದಾನವೆಷ್ಟು ; (ವಿವರ ನೀಡುವುದು)

(ಆ) ಕೇಂದ್ರ ಸರ್ಕಾರದ ಅನುದಾನದ ಜೊತೆಗೆ ರಾಜ್ಯ ಸರ್ಕಾರ ಎಷ್ಟು ಅನುದಾನ ಸೇರಿಸಿ ಅನ್ನಭಾಗ್ಯ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ ;

(ಇ) ಕೇಂದ್ರ ಸರ್ಕಾರದಿಂದ ಬರುತ್ತಿರುವ ಅನುದಾನದಿಂದ ರಾಜ್ಯ ಸರ್ಕಾರದ ಬೊಕ್ಕಸದ ಮೇಲೆ ಎಷ್ಟು ಹೊರೆ ತಗ್ಗಿದೆ ; (ವಿವರ ನೀಡುವುದು)

(ಈ) ಅನ್ನಭಾಗ್ಯ ಯೋಜನೆಯಡಿ ಅಕ್ಕಿಯನ್ನು ಯಾವ ರಾಜ್ಯದಿಂದ ತರಿಸಲಾಗುತ್ತಿದೆ ; ಈ ಅಕ್ಕಿಯ ದರವೆಷ್ಟು ; ಸಾಗಾಣಿಕೆ ಇತರೆ ವೆಚ್ಚವೆಷ್ಟು ; (ವಿವರ ನೀಡುವುದು)

(ಉ) ಹೊರ ರಾಜ್ಯದಿಂದ ತರಿಸುವ ಅಕ್ಕಿಯನ್ನು ಸಾಗಾಣಿಕೆ ಮಾಡಲು ಯಾವ ಮಾನದಂಡವನ್ನು ಅನುಸರಿಸಿ ಸಾಗಾಣಿಕೆಗಾಗಿ ವಹಿಸಿಕೊಡಲಾಗಿದೆ ; ಹಾಗೂ ಅಕ್ಕಿಯನ್ನು ಹಾಲಿ ಸಾಗಾಣಿಕೆ ಮಾಡುತ್ತಿರುವ ಕಂಪನಿ ಏಜೆನ್ಸಿ ಯಾವುದು ;

(ಊ) ರಾಜ್ಯದಲ್ಲಿ ಅನ್ನಭಾಗ್ಯ ಯೋಜನೆಗೆ ಸಂಗ್ರಹಿಸುತ್ತಿರುವ ಲೆವಿ ಪ್ರಮಾಣದ ಅಕ್ಕಿಯನ್ನು ಯಾವ ದರದಲ್ಲಿ ಖರೀದಿಸಲಾಗುತ್ತಿದೆ ; ಸಂಗ್ರಹಿಸಿದ ಈ ಅಕ್ಕಿಯು ಎಷ್ಟು ತಿಂಗಳಿಗೆ ಸಾಕಾಗುತ್ತದೆ ? (ವಿವರವಾದ ಮಾಹಿತಿ ನೀಡುವುದು)